# ಹಿಂದಿನ ತಲೆಮಾರಿನವರ ಕಲಾಪ್ರಜ್ಞೆ

"ಸುಧಾ" ಯುಗಾದಿ. ವಿಶೇಷಾಂಕ

1999



ವರಾಹವತಾರ- ಪ್ರೇಯಸಿ ಪೃಥ್ವಿಯನ್ನು ತನ್ನ ತೋಳ ತೆಕ್ಕೆಯಲ್ಲಿ ಹಿಡಿದಿರುವ ವರಾಹ. ಅದು ಶೇಷನಾಗನ ನೆರಳಲ್ಲಿ. (ಮಹಾರಾಷ್ಟ್ರ, 18ನೇ ಶತಮಾನ)

ಮಾವಿನಕಾಯಿ ರೂಪದಲ್ಲಿರುವ ಸುಣ್ಣದ ಕರಡೆ. ವಿವಿಧ ಪ್ರಾಣಿ, ಪಕ್ಷಿಗಳಿಂದ ಅಲಂಕೃತ

# ಹಿಂದಿನ ತಲೆಮಾರಿನವರ ಕಲಾಪ್ರಜ್ಞೆ

■ ಎನ್ ಸಿ ದೇಸಾಯಿ



ನಮಗೆ ಜಗತ್ತಿನ ಪರಿಚಯವಾಗುವುದು ಮೊದಲು ಕಣ್ಣಿಂದ ಅನಂತರ ಕಿವಿಯಿಂದ. ಸ್ಪರ್ಶ, ವಾಸನೆ, ಆಸ್ವಾದನೆಗಳಿಂದ ದೊರೆಯುವ ಅನುಭವಗಳು ಕಡಿಮೆ ಪ್ರಮಾಣದವು; ಅವು ನಮ್ಮ ಮನಸ್ಸನ್ನು ರೂಪಿಸಿ ತಿದ್ದುವಲ್ಲಿ ಅಷ್ಟೊಂದು ಪ್ರಭಾವ ವಹಿಸಲಾರವು.

ನಮ್ಮ ಕಣ್ಣುಗಳು ಹೊರಗಿನ ಎಲ್ಲ ವಸ್ತುಗಳನ್ನು ಸಣ್ಣವು, ದೊಡ್ಡವು, ಸಮೀಪದವು, ದೂರದವು ಎಂದು ಬೆಳಕಿನ ಸಹಾಯದಿಂದ ಗುರುತಿಸುತ್ತವೆ. ಅವುಗಳ



ಅಂಜಲಿ ಮುದ್ರದಲ್ಲಿರುವ ಅಡಕೋತು

**ಮಾನವ ಹೆಚ್ಚು ಹೆಚ್ಚು ನಾಗರಿಕನಾದಂತೆ ಅವನಲ್ಲಿಯ ಸೌಂದರ್ಯ ಪ್ರಜ್ಞೆಯೂ ಬೆಳೆಯಿತು. ಉಡುವ ಬಟ್ಟೆ, ಉಪಯೋಗಿಸುವ ಯಾವುದೇ ವಸ್ತು ಅಂದವಾಗಿರಬೇಕು, ನೋಟಕ್ಕೆ ಚೆಂದವಾಗಿರಬೇಕು, ಉಪಯೋಗಕ್ಕೆ ಹೆಚ್ಚು ಅನುಕೂಲವಾಗಿರಬೇಕು ಎಂದು ಸತತವಾಗಿ ಪ್ರಯತ್ನಿಸಿದ್ದನ್ನು ಕಾಣುತ್ತೇವೆ. ಈ ಕಾರ್ಯಕ್ಕೆ ಜತೆಗೆ ಪ್ರಜ್ಞೆಗೆ ಸಹಜವಾಗಿಯೇ ಚಿತ್ರಕಲೆ ಹಾಗೂ ಶಿಲ್ಪಗಳ ಆಧಾರವೇ ಮೂಲವಾಯಿತು. ಅವುಗಳ ತಯಾರಿಕೆಗೆ ಮಣ್ಣು, ಶಿಲೆ, ಕಟ್ಟಿಗೆ, ಲೋಹ ಮೊದಲಾದ ಮಾಧ್ಯಮಗಳನ್ನು ಉಪಯೋಗಿಸಿದ್ದಾನೆ. ಸೌಂದರ್ಯಪ್ರಜ್ಞೆ ಬೆಳೆದುಬಂದುದರ ಸಾಬೀತಿಗೆ ವಿವಿಧ ಮಾದರಿಯ ಬೀಗಗಳನ್ನು ನೋಡಿದರೆ ಸಾಕು.**



ಬಾಚಣಿಗೆ, ಕನ್ನಡಿ ಹಾಗೂ ಎಣ್ಣೆ ಕುಡಿಕೆ ಒಂದೆಡೆ ಇರುವ ವಸ್ತು

ಬಿಂಬಗಳನ್ನು ಕಂಡ ಮೇಲೆ ತುಸುಕಾಲ ಕಳೆದರೂ, ಕೆಲವೊಮ್ಮೆ ದೀರ್ಘಕಾಲ ನೆನಪಿರಿಸಿಕೊಳ್ಳಬಲ್ಲ ಶಕ್ತಿ ನಮ್ಮ ಮನಸ್ಸಿಗೆ ಇದ್ದುದರಿಂದ ಭಾಷೆಯಂಥ ಒಂದು ಸಂಪರ್ಕ ಮಾಧ್ಯಮ ಮೊದಲಿಗೆ ರೂಪುಗೊಂಡಿತು.

ಭಾಷೆ ಕಣ್ಬಿಂಬಗಳ ಒಂದು ಮಾಲೆ. ಅಲ್ಲಿ ಬಿಂಬಗಳ ಸಂಖ್ಯೆ ಹೆಚ್ಚಿದಂತೆ ಶಬ್ದ ಸಂಪತ್ತು ಬೆಳೆಯಿತು. ಕ್ರಮೇಣ ಅವುಗಳ ವಸ್ತು, ಆಕೃತಿಗಳನ್ನು ತಿಳಿಸುವ ಶಬ್ದಗಳು ಹುಟ್ಟಿಕೊಂಡಂತೆ– ಗುಣ, ಲಕ್ಷಣ ಮತ್ತು ಕ್ರಿಯೆಗಳನ್ನು ನಿರೂಪಿಸುವ ಶಬ್ದಗಳೂ ಹುಟ್ಟಿಕೊಂಡವು. ಹೀಗೆ ಮೂರ್ತ ವಸ್ತುಗಳನ್ನು ತಿಳಿಸುವ ಶಬ್ದಗಳು ಹುಟ್ಟಿ ಮುಂದೆ ಅಮೂರ್ತ ವಸ್ತುಗಳ, ವಿಷಯಗಳ ಪರಿಚಯವು ಮಾನವನಿಗೆ ಆಗತೊಡಗಿತು.

ಚಿತ್ರಕಲೆ ಗೋಚರ ಜಗತ್ತಿಗೆ ಸಂಬಂಧಿಸಿದ ಒಂದು ಮಾಧ್ಯಮ. ನಮ್ಮ ಕಣ್ಣಿಗೆ ಗೋಚರಿಸುವಂಥ ಅಂಶಗಳು ಯಾವುವು? ವಿವಿಧ ಬಣ್ಣಗಳು, ಅವುಗಳ ರೂಪ ಅಸಂಖ್ಯ.

ನಿಜ, ಒಂದು 'ಮರ' ಎಂಬ ಶಬ್ದವನ್ನು ನೆನೆಯುವಾಗ ಯಾವುದೋ ಒಂದು ಆಕಾರದ,



19ನೇ ಶತಮಾನದ ತೀರ್ಥ ಸೌಟು

ವಸ್ತುಗಳು, ದೀವಿಗೆಗಳು, ವಾದ್ಯಗಳು, ಹುಕ್ಕಾದ ಬುಡ್ಡೆಗಳು, ಆಟಿಗೆಚಿತ್ರಗಳು ಇನ್ನೂ ಏನೇನೋ ವಸ್ತುಗಳು. ಬಾಜೀರಾವ ಪೇಶ್ವೆಯ ಪ್ರೇಯಸಿ ಮಸ್ತಾನಿಯ ಮನೆಯೇ ಈ ವಸ್ತುಸಂಗ್ರಹಾಲಯಕ್ಕೆ ಪಯಣಿಸಿದೆ ಅಂದಮೇಲೆ ಆ ವೃದ್ಧ ಮಹಾಪುರುಷನದು ಸಾಹಸ ಕೆಲಸ. ನಿಜ ನನಗೆ ಪರಿಚಯವಿದ್ದವರಿಂದಲೇ ಒಂದು ಕಲ್ಲಿನ ಕಲಬತ್ತನ್ನು ದೊರಕಿಸಲಾಗಲಿಲ್ಲ. ಈ ವ್ಯಕ್ತಿ ಈ ವಸ್ತುಗಳನ್ನು ತರಲು ಏನು ಚಮತ್ಕಾರ ಮಾಡಿರಬೇಕೆಂದು ವಿಚಾರದ ಮಡುವು ತಿರುಗತೊಡಗಿತು. ಕಾಶ್ಮೀರದಿಂದ ಹಿಡಿದು ಕನ್ಯಾಕುಮಾರಿವರೆಗೆ ವಿವಿಧ ಮಾಧ್ಯಮಗಳಲ್ಲಿ ಸಿದ್ಧವಾದ ವಸ್ತುಗಳು, ಪ್ರದೇಶಕ್ಕನುಗುಣವಾದ ನಕ್ಷೆಯಲ್ಲಿ ರೂಪಗೊಂಡ ಸಲಕರಣೆಗಳು ಇಲ್ಲಿ ವಾಸವಾಗಿ ಗೃಹೋಪಯೋಗಿ ಜಾನಪದ ವಸ್ತುಗಳಂತೂ ಇಲ್ಲಿದ್ದಷ್ಟು ಬೇರೆಲ್ಲಿಯೂ ಇರಲಿಕ್ಕಿಲ್ಲವೆಂದು ಧಾರಳವಾಗಿ ಹೇಳಬಹುದು. ಇವೆಲ್ಲ ಇನ್ನು ಏನೇನೋ ವಸ್ತುಗಳು ನನ್ನನ್ನು ಆಕರ್ಷಿಸಿದವು.



ಬೆಣ್ಣೆ ಕಡಿಯುವ ಮಹಿಳೆಯ ಕಾಲುಜ್ಜುವ ವಜಿರಿ (ಗುಜರಾತ್, 19ನೇ ಶತಮಾನ)

ಅಲ್ಲಿ ವಿವಿಧ ಭಾಗಗಳಿವೆ. ದೇವರು, ದೇವತಾರ್ಚನೆಗೆ ಸಂಬಂಧಿಸಿದ ಸಲಕರಣೆಗಳು, ಅಡಿಗೆ ಮನೆ ಒಲೆಯ ಪಾತ್ರೆ, ಉಪಕರಣಗಳು, ದೀವಿಗೆಗಳು, ತಾಂಬೂಲ ಅಲ್ಲದೆ ಶೇಖರಿಸಿದ ಅಡಕೋತು, ಎಲೆ ಅಡಿಕೆ ಡಬ್ಬಿ, ಸುಣ್ಣದ ಕರಡಿಗೆ– ಮುಂತಾದವುಗಳಂತೂ ಅದ್ಭುತ ಸಂಗ್ರಹ (ಈ ವಿಷಯವಾಗಿಯೇ ಒಂದು ಲೇಖನ ಪ್ರಕಟವಾಗಿದೆ. ಪ್ರಜಾವಾಣಿ ದೀಪಾವಳಿ–1997) ಮನೆಯ ರಕ್ಷಣೆಗೆ ಬೇಕಾಗುವ ಬೀಗಗಳು, ಸೌಂದರ್ಯ ಸಾಧನೆಯ ಸಲಕರಣೆ, ಬಾಚಣಿಗೆ, ಕನ್ನಡಿ, ಮೈತಿಕ್ಕುವ ವಸ್ತುಗಳು, ಮರದ ಕೆತ್ತನೆಯ ಅದ್ಭುತ ವಸ್ತುಗಳು. ಹೀಗೆ ನೂರಾರು ವಿಷಯಕ್ಕೆ ಸಂಬಂಧಿಸಿದ ವಸ್ತುಗಳು ಅಲ್ಲಿವೆ. ಅವು ಕೂಡ ವಿವಿಧ ಪ್ರದೇಶಗಳಿಂದ ಬಂದವು. ಆದುದರಿಂದ ಅವುಗಳಲ್ಲಿ ವೈವಿಧ್ಯವಿದೆ. ಮೆರುಗಿದೆ. ಭಿನ್ನ ಪ್ರದೇಶಗಳ ಜನಜೀವನದ ಛಾಯೆಯೂ ಈ ವಸ್ತುಗಳಲ್ಲಿ ಮೂಡಿಬಂದಿದೆ.



ಹಾರುವ ಪಕ್ಷಮುಖದ ಕಿನ್ನರಿ

## ಅರ್ಚನಾ ಸಾಮಗ್ರಿ

ಕೇಳಕರರ ವಸ್ತುಸಂಗ್ರಹಾಲಯದಲ್ಲಿ ಗಣೇಶನ ವಿವಿಧ ರೂಪದ, ಆಕಾರದ ಶಿಲೆಗಳು ಕಾಣಸಿಗುತ್ತವೆ. ಅಲ್ಲದೆ ಶಿವ, ವರಾಹಾವತಾರ, ಲಕ್ಷ್ಮಿ, ಸರಸ್ವತಿ, ಗೋಪಾಲ ಹೀಗೆ ಎಷ್ಟೋ ದೇವರುಗಳಿವೆ ಅಲ್ಲಿ.

ದೇವರು ಅಂದ ಮೇಲೆ ಪೂಜೆಯಾಗಬೇಕು. ಪೂಜೆಗೆ ವಿವಿಧ ಸಾಮಗ್ರಿ ಬೇಕು, ಘಂಟೆ, ದೊಡ್ಡ ದೀಪಗಳು, ಥಾಬಾಣ (ಊಟದ ತಟ್ಟೆಗಿಂತ ದೊಡ್ಡದು) ಲೋಟ, ತಂಬಿಗೆ ಹೀಗೇ ಏನೇನೋ ಸಾಮಾನುಗಳು ಬೇಕೊ ಅವೆಲ್ಲವೂ ಕಲಾಪೂರ್ಣವಾಗಿಯೇ ನಿರ್ಮಾಣವಾಗಬೇಕೆಂಬುದು ಈ ಕಲಾಕಾರರ ಹಟ. ಈ ವಿಭಾಗವು ಕೂಡ ಹಿರಿದಾದುದೇ ಆಗಿದೆ.

**ದೀವಿಗೆಗಳು:** ಇಲ್ಲಿರುವ ದೀಪಗಳ ವೈವಿಧ್ಯವಾದ ಸಂಗ್ರಹವೂ ಮಹತ್ವದ್ದು. ಸಾಲುದೀಪ, ನಿಲುವು ದೀಪ, ತೂಗುದೀಪ



ಒಲೆಯಲ್ಲೂ ಅಲಂಕಾರ





ಡಾಲ್ಫಿ ಮೀನಿನ ಆಕಾರದ 'ಮಗರ ಯಾರಝು' ಎಂಬ ತಂತುವಾದ್ಯ

ಹೀಗೆ ಹಲವು ಪ್ರಕಾರ. ಅವುಗಳಲ್ಲಿ ಮಾನವ, ಪಶು-ಪಕ್ಷಿಗಳ ವಿವಿಧ ಭಂಗಿಗಳನ್ನುಪಯೋಗಿಸಿ ನಿರ್ಮಿಸಿದ ಕೃತಿಗಳು ಸುಂದರವಾಗಿವೆ. ಅವು ಕೂಡ ಭಿನ್ನ ಪ್ರದೇಶಗಳಿಂದ ಸಂಗ್ರಹಿಸಿದವುಗಳು. ಹಾಗಾಗಿ ಆಯಾ ಪ್ರದೇಶಗಳ ಸಂಸ್ಕೃತಿಯನ್ನು ಬಿಂಬಿಸುತ್ತವೆ.

**ತಾಂಬೂಲ ವಸ್ತುಗಳು:** ಕೇಳಕರರ ವಸ್ತುಸಂಗ್ರಹಾಲಯದಲ್ಲಿ ಗಮನಿಸಬೇಕಾದುದು ತಾಂಬೂಲ ಹಾಕಿಕೊಳ್ಳಲು ಬಳಸುತ್ತಿದ್ದ ವಸ್ತುಗಳ ಕಲಾತ್ಮಕತೆ. ಮೀನದಿಂದ ಹಿಡಿದು ಆನೆಯವರೆಗಿನ ಚಿತ್ರಗಳನ್ನು ಅಡಿಕೆಯ ಡಬ್ಬಿಯ ಮೇಲೆ ಕಾಣಬಹುದು. ಸುಣ್ಣದ ಕರಡಿಗೆಯಂಥ ಚಿಕ್ಕ ವಸ್ತುವಿಗೂ ಕಲೆಯ ಮೆರುಗು. ಅದೇಕೆ ಸುಣ್ಣಹಚ್ಚುವ ಕಡ್ಡಿಗೂ ಕಲೆಯ ರೂಪ. ಇನ್ನು ಅಡಕೋತಿನ ವೈಭವವಂತೂ ವರ್ಣನೆಗೆ ಮೀರಿದ್ದು. ಅದರ ಮೇಲೆ ಮಾನವನ ಶೃಂಗಾರದ ಭಂಗಿ, ಪ್ರಾಣಿ-ಪಕ್ಷಿಗಳ ವಿವಿಧರೂಪ. ಅವುಗಳಲ್ಲಿ ಶ್ರೀಮಂತರದ್ದಾದರೆ ಬೆಳ್ಳಿಯ ವಸ್ತುಗಳು. ಸಾಮಾನ್ಯರದ್ದು ಹೆಚ್ಚಾಗಿ ಲೋಹದ ವಸ್ತುಗಳಿವೆ.

**ಶೃಂಗಾರ ಸಾಧನಗಳು:** ಸಾಬೂನು ಇಲ್ಲದ ಕಾಲವದು. ಆವಾಗ ಮೈ ಉಜ್ಜುತ್ತಿದ್ದುದು ಕಲ್ಲಿನ ತುಣುಕು ಇಲ್ಲವೆ ಲೋಹದಿಂದ ಸಿದ್ಧವಾದ ಹುರುಕು-ಬರಕು ಮುಖವುಳ್ಳ 'Rough surface' ವಸ್ತು. ಅದಕ್ಕೆ ಹಿಂದಿಯಲ್ಲಿ 'ವಜಿರಿ' ಎಂದು ಕರೆದದ್ದುಂಟು. ಇನ್ನು ಬಾಚಣಿಕೆ, ಕನ್ನಡಿ ಹಾಗೂ ಎಣ್ಣೆಯ ಬಾಟಲಿ ಎಲ್ಲವನ್ನೂ ಒಂದೆಡೆ ಸಿಗುವ ಹಾಗೆ ಇಡುವ ಲೋಹದ ವಸ್ತು ನಮ್ಮ ಗಮನ ಸೆಳೆಯುತ್ತದೆ. ಇದು ಉಪಯೋಗದ ದೃಷ್ಟಿಯಿಂದ ಅನುಕೂಲವಷ್ಟೇ ಅಲ್ಲ ಉತ್ತಮ ಕಲಾಕೃತಿ ಕೂಡ. ಇನ್ನು 'ವಜೀರಿ'ಗಳನ್ನು ನಿರ್ಮಿಸಿದ ರೀತಿಯನ್ನು ಕಂಡರಂತೂ ಮನಸು ಸೋಲುತ್ತದೆ.

**ಲೇಖನ ಸಾಮಗ್ರಿ:** ಆ ಕಾಲದಲ್ಲಿ ಮಸಿಯ ಕುಡಿಕೆಯಲ್ಲೇ ಲೆಕ್ಕಣಿಯನ್ನು ಅದ್ದಿ ಬರೆಯುವ ಪದ್ಧತಿ ರೂಢಿಯಲ್ಲಿತ್ತು. ಆ ಮಸಿಯ ಕುಡಿಕೆಯನ್ನು ಕಲಾಪೂರ್ಣವಾಗಿ ನಿರ್ಮಿಸಲು ವಿಶ್ವಕರ್ಮಿಗಳು ಹಿಂದೆಬಿದ್ದಿಲ್ಲ. ಅವನ್ನು ನೋಡಿಯೇ ತಿಳಿಯಬೇಕು. ಇನ್ನು ಲೆಕ್ಕಣಿಕೆಗಳನ್ನು ಜೋಪಾನವಾಗಿಡುವ ಡಬ್ಬಿಗಳೂ ಅಲಂಕೃತವಾಗಿಯೇ ನಿರ್ಮಾಣವಾಗಿವೆ. ಲೆಕ್ಕಣಿಕೆಯ ಪೆಟ್ಟಿಗೆ ಮಾತ್ರ ಕಟ್ಟಿಗೆಯಿಂದ ನಿರ್ಮಾಣವಾಗಿದ್ದು ವರ್ಣಗಳಿಂದ ಕಲೆಯರೂಪ ತಾಳಿವೆ.

**ಬೀಗಗಳು:** ಮನೆಯ ರಕ್ಷಣೆಗಾಗಿ ಬೀಗಗಳು ಬೇಕು. ಬೆಲೆಬಾಳುವ ವಸ್ತುಗಳ ಜೋಪಾನಕ್ಕಾಗಿ ಬೀಗಗಳು ಗಟ್ಟಿಮುಟ್ಟಾಗಿದ್ದರೆ ಸಾಕಾಗಿತ್ತು. ಆದರೆ ಶಿಲ್ಪಿಗಳು ಬೀಗಗಳಿಗೆ ಕಲೆಯ ಮೆರುಗು ನೀಡಿದ್ದಾರೆ. ಇದಲ್ಲದೆ ಇಲ್ಲಿಯ ಕಲಾಪೂರ್ಣ ವಾದ್ಯಗಳು ಗಮನಾರ್ಹ. ಈಗ ಕೇಳಕರರ ವಸ್ತುಸಂಗ್ರಹಾಲಯ ಮಹಾರಾಷ್ಟ್ರ ಸರ್ಕಾರದ ಆಡಳಿತದಲ್ಲಿದೆ.

ಹೀಗೆ ನಮ್ಮ ಹಿಂದಿನ ತಲೆಮಾರಿನವರ ಕಲಾಪ್ರಜ್ಞೆ ಯಾವಾಗಲೂ ಹಿರಿದು. ✤